ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ಕ್ರೀಡಾ ಪಟುಗಳಿಗೆ ಸೌಲಭ್ಯ ಒದಗಿಸುವ ಕುರಿತು

ಶ್ರೀ ಆಯನೂರು ಮಂಜುನಾಥ(ಪದವೀಧರರ ಕ್ಷೇತ್ರ):-

1385 (1607) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಅಂತರ್ರಾಷ್ಟ್ರೀಯ ಕ್ರೀಡೆಗಳಲ್ಲಿ ಚಿನ್ನವನ್ನು ಗೆದ್ದು ಭಾರತ ದೇಶಕ್ಕೆ ಗೌರವವನ್ನು ತಂದಿರುವ ಕ್ರೀಡಾಪಟುಗಳಿಗೆ ರಾಜ್ಯ ಸರ್ಕಾರದಿಂದ ಲಭಿಸುವ ಸೌಲಭ್ಯಗಳೇನು ; ರಾಜ್ಯ ಸರ್ಕಾರದಿಂದ ಇವರಿಗೆ ಎಷ್ಟು ನಗದು ಬಹುಮಾನ ನೀಡಲಾಗುತ್ತಿದೆ ;

(ಆ) ಈ ಕ್ರೀಡಾಪಟುಗಳಿಗೆ ವಿದ್ಯಾರ್ಹತೆಗೆ ತಕ್ಕ ಉದ್ಯೋಗ ಕಲ್ಪಿಸಿಕೊಡುವ ಯೋಜನೆ ಇದೆಯೇ ; ಇಲ್ಲದಿದ್ದಲ್ಲಿ, ಇಂತಹ ಕ್ರೀಡಾಪಟುಗಳಿಗೆ ತಕ್ಷಣ ಉದ್ಯೋಗ ಕಲ್ಪಿಸುವ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳುವುದೇ ;

(ಇ) ಇವರಿಂದ ಕೋರಿಕೆ ಬಂದಲ್ಲಿ ವಸತಿ ಹೀನರಿಗೆ ಬೆಂಗಳೂರಿನಲ್ಲಿ ಬಿಡಿಎ ನಿವೇಶನ ಮಂಜೂರು ಮಾಡಲಾಗುವುದೇ ; ಇಂತಹ ಕ್ರೀಡಾಪಟುಗಳಿಗೆ ವಿವಿಧ ಕ್ರೀಡಾ ಅಕಾಡೆಮಿಗೆ ತರಬೇತಿದಾರರನ್ನಾಗಿ ನೇಮಿಸುವ ಉದ್ದೇಶ ಸರ್ಕಾರಕ್ಕೆ ಇದೆಯೇ;

(ಈ) ರಾಜ್ಯದ ಕ್ರೀಡಾಪಟುಗಳು ಅಂತರ್ರಾಜ್ಯ ಮತ್ತು ಅಂತರ್ ರಾಷ್ಟ್ರೀಯ ಕ್ರೀಡೆಗಳಲ್ಲಿ ಭಾಗವಹಿಸಲು ಅನುವಾಗುವಂತೆ ಅವರ ಎಲ್ಲ ಖರ್ಚು ವೆಚ್ಚಗಳನ್ನು ಸರ್ಕಾರ ಭರಿಸಲು ಮುಂದಾಗುವುದೇ; ಈಗಾಗಲೇ ಯಾವ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ;

(ಉ) ಗಾಲ್ಫ್ ಕ್ಲಬ್, ಬ್ಯಾಡ್ಮಿಂಟನ್ ಕ್ಲಬ್, ಇನ್ನಿತರ ಕ್ಲಬ್ ರೀತ್ಯಾ ರಾಜ್ಯದಲ್ಲಿ ಚೆಸ್ ಕ್ಲಬ್ ಆರಂಭಿಸುವ ಯೋಚನೆ ಸರ್ಕಾರದ ಮುಂದಿದೆಯೇ ;

(ಊ) ಅಂಗವಿಕಲರ ಚೆಸ್ ಕ್ರೀಡೆಯಲ್ಲಿ ಏಸಿಯನ್ ಪ್ಯಾರಾಗೇಮ್ ಚಿನ್ನದ ಪದಕ ಪಡೆದ ಶಿವಮೊಗ್ಗದ ಕ್ರೀಡಾಪಟುಗೆ ಸರ್ಕಾರ ಇದುವರೆಗೆ ನೀಡಿರುವ ಸೌಲಭ್ಯಗಳೇನು ; ಇವರ ಬೇಡಿಕೆಗಳೇನು? (ವಿವರ ನೀಡುವುದು)